# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1303 |
| ಸದಸ್ಯರ ಹೆಸರು | : | ಶ್ರೀ ಲಹರ್ ಸಿಂಗ್ ಸಿರೋಯಾ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 21.12.2018 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿ ನಿರ್ಮಿಸಲು ಉದ್ದೇಶಿಸಿರುವ ಫೆರಿಫೆರಲ್ ರಿಂಗ್ ರಸ್ತೆ ಯೋಜನೆಗೆ ಅಂಗೀಕಾರ ನೀಡಲಾಗಿದೆಯೇ; ಹಾಗಿದ್ದಲ್ಲಿ, ಅದರ ಸಂಪೂರ್ಣ ವಿವರಗಳನ್ನು ನೀಡುವುದು; | ಬೆಂಗಳೂರಿನಲ್ಲಿ ನಿರ್ಮಿಸಲು ಉದ್ದೇಶಿಸಿರುವ ಫೆರಿಫೆರಲ್ ರಿಂಗ್ ರಸ್ತೆಯನ್ನು ಅಂದಾಜು ವೆಚ್ಚ ರೂ.11950 ಕೋಟಿ (ರೂ.8100 ಕೋಟಿ ಭೂಸ್ವಾಧೀನಕ್ಕಾಗಿ ಮತ್ತು ರೂ.3850 ಕೋಟಿ ರಸ್ತೆ ನಿರ್ಮಾಣಕ್ಕಾಗಿ Intelligent Transport System ಒಳಗೊಂಡಂತೆ) ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ನಅಇ 345 ಬೆಂಆಸೇ 2013, ದಿ:11.07.2016 ರಲ್ಲಿ ಸರ್ಕಾರದ ಅನುಮೋದನೆಯನ್ನು ನೀಡಲಾಗಿತ್ತು.<br><br>ಪ್ರಸ್ತಾವಿತ ಫೆರಿಫೆರಲ್ ರಿಂಗ್ ರಸ್ತೆ ಯೋಜನೆಯ ನಿರ್ಮಾಣಕ್ಕಾಗಿ ಒಟ್ಟು 65.50 ಕಿ.ಮೀ ಉದ್ದ 100.00 ಮೀ ಅಗಲಕ್ಕೆ ಭೂಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಲಾಗಿದ್ದು, ದಿ:29.06.2007 ರಂದು ಅಂತಿಮ ಅಧಿಸೂಚನೆ ಹೊರಡಿಸಲಾಗಿರುತ್ತದೆ. 100.00 ಮೀ ಅಗಲದಲ್ಲಿ 75.00 ಮೀ Right of Way (ROW) ಮತ್ತು ಉಳಿದ 25.00 ಮೀ ನಲ್ಲಿ ವಾಣಿಜ್ಯ ಉದ್ದೇಶಕ್ಕಾಗಿ ಕಾಯ್ದಿರಿಸಿದ್ದು, ಇದನ್ನು ಭೂಪರಿಹಾರವಾಗಿ ನೀಡಲು ಅನುಮೋದನೆ ನೀಡಲಾಗಿತ್ತು.<br><br>ಸರ್ಕಾರದ ಆದೇಶ ಸಂಖ್ಯೆ: ನಅಇ 345 ಬೆಂಆಸೇ 2013, ದಿನಾಂಕ: 14.07.2016 ರಲ್ಲಿ ಫೆರಿಫೆರಲ್ ರಿಂಗ್ ರಸ್ತೆ ಯೋಜನೆಯನ್ನು Special Purpose Vehicle (SPV) ಮೂಲಕ ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆ ನೀಡಲಾಗಿತ್ತು.<br><br>ಸರ್ಕಾರದ ಆದೇಶ ಸಂಖ್ಯೆ: ನಅಇ 345 ಬೆಂಆಸೇ 2013, ದಿ:06.12.2016 ರಲ್ಲಿ ಫೆರಿಫೆರಲ್ ರಿಂಗ್ ರಸ್ತೆ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು Special Purpose Vehicle (SPV) ಯನ್ನು Companies Act ಅಡಿಯಲ್ಲಿ ಅಳವಡಿಸಿಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.<br><br>ಭೂಸ್ವಾಧೀನದ ವೆಚ್ಚವು ಸೇರಿದಂತೆ ಹೆಚ್.ಎ.ಎಂ. ಅಡಿ ಪಾವತಿ ಮಾಡಬೇಕಾದ ಮೊತ್ತ ಮತ್ತು 12 ವರ್ಷಗಳಿಗೆ ಕಾರ್ಯನಿರ್ವಹಣೆ ಮತ್ತು ಮೇಲ್ವಿಚಾರಣೆ ವೆಚ್ಚ ರೂ.17061 ಕೋಟಿಗಳೆಂದೂ ಮತ್ತು ಅದೇ ಅವಧಿಯಲ್ಲಿ ಎಸ್.ಪಿ.ವಿ. ಇಂದ ಆದಾಯ ಸಂಗ್ರಹಣೆಯು ರೂ. 17313 ಕೋಟಿಗಳೆಂದು ಲೆಕ್ಕ ಹಾಕಲಾಗಿದೆ. ಎಸ್.ಪಿ.ವಿ. ಇಂದ ಸಂಗ್ರಹಣೆಯಾದ ಆದಾಯವನ್ನು ಯೋಜನೆಯ ವೆಚ್ಚಕ್ಕೆ ಬಳಸಿ ಹಾಗೂ ಹೆಚ್ಚುವರಿಯಾದ ಮೊತ್ತವನ್ನು ಮೂಲಸೌಲಭ್ಯ ನಿಧಿಗೆ ಸೇರ್ಪಡೆ ಮಾಡಲು ರಾಜ್ಯ ಸರ್ಕಾರಕ್ಕೆ ಹಿಂತಿರುಗಿಸಲು ಉದ್ದೇಶಿಸಲಾಗಿದೆ. |

| | | |
|---|---|---|
| | | ಸರ್ಕಾರದ ಆದೇಶ ಸಂಖ್ಯೆ ನಅಇ 214 ಬೆಂಆಸೇ 2018 ದಿ:24.11.2018 ರನ್ವಯ ಫೆರಿಫೆರಲ್ ರಿಂಗ್ ರಸ್ತೆ ಯೋಜನೆಯನ್ನು ಹಲವು ಮಾರ್ಪಾಡುಗಳೊಂದಿಗೆ ನಿರ್ಮಾಣ ಮಾಡಲು ಹಾಗೂ ರಾಜ್ಯ ಸರ್ಕಾರದ ಸಂಪೂರ್ಣ ಹಣದಿಂದ ಭರಿಸಲಾಗುವ ಯೋಜನೆಯಾಗಿ ಪಿ.ಆರ್.ಆರ್ ರಸ್ತೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.<br><br>ಪಿ.ಆರ್.ಆರ್ ಯೋಜನೆಯನ್ನು ಅನುಷ್ಠಾನಗೊಳಿಸಲು 2018-19 ನೇ ಸಾಲಿನಲ್ಲಿ ರೂ.1000 ಕೋಟಿಗಳು, 2019-20 ನೇ ಸಾಲಿನಲ್ಲಿ ರೂ.2000 ಕೋಟಿಗಳು, 2020-21 ನೇ ಸಾಲಿನಲ್ಲಿ ರೂ.3500 ಕೋಟಿಗಳು ಮತ್ತು 2021-22 ನೇ ಸಾಲಿನಲ್ಲಿ ರೂ.3500 ಕೋಟಿಗಳು, 2022-23 ನೇ ಸಾಲಿನಿಂದ 2032-33 ರವರೆಗೆ ಉಳಿದ ಹಣವನ್ನು ವರ್ಷವಾರು ಪ್ರಮಾಣದಲ್ಲಿ ಮೂಲಸೌಲಭ್ಯ ನಿಧಿಯಿಂದ ರಾಜ್ಯ ಸರ್ಕಾರದ ವತಿಯಿಂದ ಸಾಲವಾಗಿ ಒದಗಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.<br><br>ಇ.ಪಿ.ಸಿ / ಹೈಬ್ರಿಡ್ ಆನ್ಯೂಯಿಟಿ ಮಾದರಿಯಡಿ ಪಿ.ಆರ್.ಆರ್ ನಿರ್ಮಾಣಕ್ಕೆ ಟೆಂಡರ್‌ಗಳನ್ನು ಆಹ್ವಾನಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. |
| ಆ) | ಯೋಜನೆ ಪೂರ್ಣಗೊಳ್ಳಲು ಕಾಲಮಿತಿ ನಿಗದಿಪಡಿಸಲಾಗಿದೆಯೇ? (ಪೂರ್ಣ ಮಾಹಿತಿಯನ್ನು ನೀಡುವುದು) | ಭೂಸ್ವಾಧೀನ ಪ್ರಕ್ರಿಯೆ ನಂತರ ರಸ್ತೆ ನಿರ್ಮಾಣಕ್ಕಾಗಿ ಟೆಂಡರ್ ಕರೆದು ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಯೋಜನೆಯನ್ನು ಪೂರ್ಣಗೊಳಿಸಲು ಕಾಲಮಿತಿ ನಿಗದಿಪಡಿಸಲಾಗುವುದು. |

ಸಂಖ್ಯೆ: ನಅಇ 674 ಬೆಂಭೂಸ್ವಾ 2018

(ಡಾ. ಜಿ ಪರಮೇಶ್ವರ)
ಉಪ ಮುಖ್ಯಮಂತ್ರಿ